# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 961
ವಿಧಾನ ಪರಿಷತ್ತಿನ ಮಾನ್ಯ ಸದಸ್ಯರ ಹೆಸರು : ಶ್ರೀ ಗೋವಿಂದ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 21.12.2021
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ವಿಕಲಚೇತನರ ನೌಕರರಿಗೆ ಸಮಯಕ್ಕೆ ಸರಿಯಾಗಿ ಬಡ್ತಿ ನೀಡುತ್ತಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಬಂದಿರುವುದಿಲ್ಲ. |
| ಆ | ವಿಕಲಚೇತನರಿಗೆ ಇರುವ ವಿಶೇಷ ದೌರ್ಬಲ್ಯ ರಜೆ, ಸೇವಾ ಸೌಲಭ್ಯ ನೀಡಲಾಗುತ್ತಿದೆಯೇ | ವಿಕಲಚೇತನ ಸರ್ಕಾರಿ ನೌಕರರಿಗೆ ವಿಶೇಷ ದೌರ್ಬಲ್ಯ ರಜೆ ನೀಡಲು ನಿಯಮಗಳಡಿ ಅವಕಾಶ ಇರುವುದಿಲ್ಲ.<br>ಇನ್ನುಳಿದಂತೆ ವಿಕಲಚೇತನ ಸರ್ಕಾರಿ ನೌಕರರಿಗೆ ಇರುವ ಸೇವಾ ಸೌಲಭ್ಯಗಳನ್ನು ಕ.ನಾ.ಸೇ. ನಿಯಮಗಳನ್ವಯ ನೀಡಲಾಗುತ್ತಿದೆ. |
| ಇ | ವಿಕಲಚೇತನರ ಕುಂದು ಕೊರತೆಗಳಿಗೆ ಸಂಬಂಧಿಸಿದ ಕಡತಗಳನ್ನು ಸರ್ಕಾರಿ ಕಚೇರಿಗಳಲ್ಲಿ ತ್ವರಿತವಾಗಿ ವಿಲೇವಾರಿ ಮಾಡಲಾಗುತ್ತಿದೆಯೇ; | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ವಿಕಲಚೇತನರ ಕುಂದು ಕೊರತೆಗಳಿಗೆ ಸಂಬಂಧಿಸಿದ ಕಡತಗಳನ್ನು ತ್ವರಿತವಾಗಿ ವಿಲೇವಾರಿ ಮಾಡಲಾಗುತ್ತಿದೆ.<br>ಇನ್ನುಳಿದಂತೆ ಇತರೆ ಇಲಾಖೆಗಳಲ್ಲಿ ವಿಕಲಚೇತನರ ಕುಂದು ಕೊರತೆಗಳಿಗೆ ಸಂಬಂಧಿಸಿದ ಕಡತಗಳನ್ನು ತ್ವರಿತವಾಗಿ ವಿಲೇ ಮಾಡದಿರುವ ಬಗ್ಗೆ ಇಲಾಖೆಯ ಗಮನಕ್ಕೆ ಬಂದಿರುವುದಿಲ್ಲ. |
| ಈ | ಅಂಗವಿಕಲರ ಹಕ್ಕುಗಳ ಅಧಿನಿಯಮ ಆಯುಕ್ತರನ್ನು ಇದುವರೆಗೂ ನೇಮಕ ಮಾಡದಿರಲು ಕಾರಣವೇನು? | ಸರ್ಕಾರದ ಆದೇಶ ಸಂಖ್ಯೆ:ಮಮಇ 249 ಪಿಹೆಚ್‌ಪಿ 2020 ದಿನಾಂಕ:12.11.2021ರಲ್ಲಿ ಅಂಗವಿಕಲ ವ್ಯಕ್ತಿಗಳ ಅಧಿನಿಯಮ ಆಯುಕ್ತರನ್ನು ಆಯ್ಕೆ ಮಾಡಲು ಸಮಿತಿಯನ್ನು ರಚಿಸಲಾಗಿರುತ್ತದೆ. ಆಯುಕ್ತರ ಹುದ್ದೆಗೆ ಸ್ವೀಕರಿಸಲಾಗಿರುವ ಅರ್ಜಿಗಳನ್ನು ಪರಿಶೀಲಿಸಿ ಕ್ರಮವಹಿಸಲಾಗುತ್ತಿದೆ. |
| ಉ | ಆಯುಕ್ತರ ಹುದ್ದೆಗೆ ಎಷ್ಟು ಅರ್ಜಿಗಳು ಬಂದಿವೆ: (ಹೆಸರು ಮತ್ತು ವಿಳಾಸದ ಪಟ್ಟಿಯನ್ನು ಒದಗಿಸುವುದು) | ಆಯುಕ್ತರ ಹುದ್ದೆಗೆ ನಿಗಧಿತ ಅವಧಿಯೊಳಗೆ ಸ್ವೀಕೃತವಾಗಿರುವ ಅರ್ಜಿಗಳ ಸಂಖ್ಯೆ:47, ಆಯ್ಕೆ ಪ್ರಕ್ರಿಯೆಯು ಗೌಪ್ಯವಾಗಿರುವುದರಿಂದ ಹೆಸರು ಮತ್ತು ವಿಳಾಸದ ಪಟ್ಟಿಯನ್ನು ಒದಗಿಸಲು ಬರುವುದಿಲ್ಲ. |
| ಊ | ಅಂಗವಿಕಲರ ಅಭಿವೃದ್ಧಿಗಾಗಿ ವಿವಿಧ ಇಲಾಖೆಗಳಲ್ಲಿ ತೆರಿಗೆ ರೂಪದಲ್ಲಿ ಪಡೆಯುವ "ಅಂಗವಿಕಲರ ಸೇಸ್"ಹಣ ಕಳೆದ 3 ವರ್ಷದಿಂದ ಎಷ್ಟು ಹಣ ಸರ್ಕಾರಕ್ಕೆ ಬಂದಿದೆ; (ಜಿಲ್ಲಾವಾರು ವಿವರ ನೀಡುವುದು) | ಅಂಗವಿಕಲರ ಅಭಿವೃದ್ಧಿಗಾಗಿ ಯಾವುದೇ ಇಲಾಖೆಗಳಲ್ಲಿ ತೆರಿಗೆ ರೂಪದಲ್ಲಿ "ಅಂಗವಿಕಲರ ಸೇಸ್"ಹಣವನ್ನು ಪಡೆಯುತ್ತಿರುವುದಿಲ್ಲ. |
| ಋ | ಕಳೆದ 3 ವರ್ಷದಿಂದ ಈ ಹಣವನ್ನು ಯಾವ ಯಾವ ಯೋಜನೆ/ ಕಾರ್ಯಗಳಿಗೆ ಸರ್ಕಾರ ಬಳಸಿಕೊಂಡಿದೆ? (ಜಿಲ್ಲಾವಾರು ವಿವರ ನೀಡುವುದು) | ಅನ್ವಯಿಸುವುದಿಲ್ಲ. |

**ಸಂ: ಮಮಇ 278 ಪಿಹೆಚ್.ಪಿ 2021**

Halappa B.A.

(ಆಚಾರ ಹಾಲಪ್ಪ ಬಸಪ್ಪ)
**ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು**